# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು | : | ಶ್ರೀ ಎನ್. ರವಿಕುಮಾರ್ |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 165 |
| ಉತ್ತರಿಸಬೇಕಾದ ದಿನಾಂಕ | : | 14.12.2021 |
| ಉತ್ತರಿಸಬೇಕಾದ ಸಚಿವರು | : | ಸಹಕಾರ ಸಚಿವರು |

<table>
<tr><th>ಕ್ರ.ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಕಳೆದ 3 ವರ್ಷಗಳಲ್ಲಿ ಸಾಲ ನೀಡಲು ಸಹಕಾರಿ ಸಂಸ್ಥೆಗಳಿಗೆ ನೀಡಲಾದ ಮೊತ್ತವೆಷ್ಟು; ಸದರಿ ಮೊತ್ತದ ಮರುಪಾವತಿ ಕುರಿತು ಸರ್ಕಾರ ಕೈಗೊಂಡ ಕ್ರಮಗಳೇನು;</td><td>
ಸರ್ಕಾರದಿಂದ ಕಳೆದ ಮೂರು ವರ್ಷಗಳಲ್ಲಿ ಕರ್ನಾಟಕ ರಾಜ್ಯ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ (ಕಸ್ಕಾರ್ಡ್)ಗೆ ಮಾತ್ರ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್(ಪಿಕಾರ್ಡ್) ಗಳ ಮೂಲಕ ರೈತ ಸದಸ್ಯರಿಗೆ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಸಾಲ ನೀಡಲು ರೂ.24.56 ಕೋಟಿಗಳನ್ನು ಸಾಲದ ರೂಪದಲ್ಲಿ ನೀಡಲಾಗಿದೆ.
ಇದಲ್ಲದೇ ನಬಾರ್ಡ್ ಮತ್ತು ಅಪೆಕ್ಸ್ ಬ್ಯಾಂಕಿನಿಂದ ಸಹಕಾರ ಸಂಸ್ಥೆಗಳಿಗೆ ರೂ. 24,976.50 ಕೋಟಿಗಳನ್ನು ಕೃಷಿ ಸಾಲದ ಪುನರ್ ಧನವನ್ನಾಗಿ ನೀಡಿದ್ದು, ಅದರ ವಿವರ ಈ ಕೆಳಗಿನಂತಿರುತ್ತದೆ.
(ರೂ.ಕೋಟಿಗಳಲ್ಲಿ)
<table>
<tr><th>ವರ್ಷ</th><th>ನಬಾರ್ಡ್ ಕಸ್ಕಾರ್ಡ್ ಬ್ಯಾಂಕಿಗೆ ನೀಡಿದ ಪುನರ್ ಧನ</th><th>ನಬಾರ್ಡ್ ಡಿಸಿಸಿ ಬ್ಯಾಂಕುಗಳಿಗೆ ಅಪೆಕ್ಸ್ ಬ್ಯಾಂಕಿನ ಮೂಲಕ ನೀಡಿದ ಪುನರ್ ಧನ</th><th>ಅಪೆಕ್ಸ್ ಬ್ಯಾಂಕಿನ ಬಂಡವಾಳದಲ್ಲಿ ಡಿಸಿಸಿ ಬ್ಯಾಂಕುಗಳಿಗೆ ನೀಡಿದ ಸಾಲದ ಪುನರ್ ಧನ</th></tr>
<tr><td>2018–19</td><td>286.39</td><td>3485.46</td><td>3097.83</td></tr>
<tr><td>2019–20</td><td>169.09</td><td>4999.12</td><td>2311.74</td></tr>
<tr><td>2020–21</td><td>315.61</td><td>9861.91</td><td>449.35</td></tr>
</table>
ಕೃಷಿಯೇತರ ಉದ್ದೇಶಗಳಿಗೆ ಡಿಸಿಸಿ ಬ್ಯಾಂಕುಗಳ ತಮ್ಮ ಸದಸ್ಯರಿಂದ ಸಂಗ್ರಹಿಸಿದ ಬಂಡವಾಳದಲ್ಲಿ ಸಾಲ ನೀಡುತ್ತಿರುತ್ತವೆ.
ಸರ್ಕಾರದಿಂದ ಕಸ್ಕಾರ್ಡ್ ಬ್ಯಾಂಕ್ ಹೊರತುಪಡಿಸಿ ಉಳಿದ ಸಹಕಾರ ಸಂಸ್ಥೆಗಳ ಸದಸ್ಯರಿಗೆ ಸಾಲ ವಿತರಿಸಿಲು ಅನುದಾನ ಒದಗಿಸುತ್ತಿರುವುದಿಲ್ಲ, ಬದಲಿಗೆ ಸಹಕಾರಿ ಸಂಸ್ಥೆಗಳು ತಮ್ಮ ಒಟ್ಟಾರೆ ಸಂಪನ್ಮೂಲದಿಂದ ರೈತರಿಗೆ ಮತ್ತು ಸ್ವ-ಸಹಾಯ ಗುಂಪಿನ ಸದಸ್ಯರಿಗೆ ವಿತರಿಸಿದ ಸಾಲಗಳನ್ನು ಸದಸ್ಯರು ಸಕಾಲದಲ್ಲಿ ಮರುಪಾವತಿಸಿದಲ್ಲಿ ಫಲಾನುಭವಿಗಳ ಪರವಾಗಿ ಸಹಕಾರ ಸಂಸ್ಥೆಗಳಿಗೆ ಬಡ್ಡಿ ಸಹಾಯಧನವನ್ನು ಸರ್ಕಾರದಿಂದ ಒದಗಿಸಲಾಗುತ್ತಿದೆ.
ಸರ್ಕಾರ ಕಸ್ಕಾರ್ಡ್ ಬ್ಯಾಂಕಿಗೆ ನಬಾರ್ಡ್ ಸದರಿ ಸಂಸ್ಥೆಗೆ ನೀಡಿದ ಸಾಲದ ಶೇ.5 ರಷ್ಟು ಸಾಲವನ್ನು ರಾಜ್ಯ ಸರ್ಕಾರದ ವಂತಿಕೆಯನ್ನಾಗಿ ನೀಡಿದ್ದು, ನಬಾರ್ಡ್ ಸಾಲ ಮರುಪಾವತಿಸಲು ನಿಗದಿಪಡಿಸಿದ ಕಂತುಗಳಲ್ಲಿ ರಾಜ್ಯ ಸರ್ಕಾರದ ಸಾಲದ ಭಾಗ ಸಹ ಪಾವತಿಸಬೇಕಿದೆ. ಕಳೆದ ಮೂರು ವರ್ಷಗಳಲ್ಲಿ ರೂ.29.70 ಕೋಟಿಗಳ ಸಾಲವನ್ನು ಮರುಪಾವತಿಸಿದ್ದು, ಯಾವುದೇ ಸುಸ್ತಿ ಬಾಕಿ ಇರುವುದಿಲ್ಲ.
</td></tr>
</table>

| | | |
|---|---|---|
| | | ನಬಾರ್ಡ್ ಮತ್ತು ಅಪೆಕ್ಸ್ ಬ್ಯಾಂಕ್ ಡಿಸಿಸಿ ಬ್ಯಾಂಕುಗಳಿಗೆ ನೀಡಿದ ಸಾಲದ ಮರುಪಾವತಿಯನ್ನು ಸದರಿ ಸಂಸ್ಥೆಗಳು ವಿಧಿಸಿದ ಷರತ್ತಿನನ್ವಯ ಮರುಪಾವತಿಸಬೇಕಿರುತ್ತದೆ.<br><br>ರೈತ ಸದಸ್ಯರು ಸದರಿ ಸಂಸ್ಥೆಗಳಿಂದ ಪಡೆದ ಸಾಲವನ್ನು ಮರುಪಾವತಿಸದೇ ಸುಸ್ತಿದಾರರಾಗಿದ್ದಲ್ಲಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಸಾಲಗಳಿಗೆ ಸಂಬಂಧಿಸಿದಂತೆ ಕಾನೂನು ಪ್ರಕಾರ ಸಾಲ ವಸೂಲಾತಿಗೆ ಕ್ರಮವಿಡಲು ಕಸ್ಕಾರ್ಡ್ ಬ್ಯಾಂಕ್ ಮತ್ತು ಎಲ್ಲಾ ಡಿಸಿಸಿ ಬ್ಯಾಂಕುಗಳಿಗೆ ಮತ್ತು ಅಲ್ಪಾವಧಿ ಕೃಷಿ ಸಾಲಗಳಿಗೆ ಸಂಬಂಧಿಸಿದ ಕಲಬುರಗಿ ಡಿಸಿಸಿ ಬ್ಯಾಂಕಿಗೆ ಕಾನೂನು ಪ್ರಕಾರ ವಸೂಲು ಮಾಡಲು ಸೂಚಿಸಿ ಸುತ್ತೋಲೆಯನ್ನು ನೀಡಲಾಗಿದೆ. |
| ಆ) | ಸರ್ಕಾರವು ಸಹಕಾರಿ ಇಲಾಖೆಯ ಮೂಲಕ ನೀಡಿದ ಸಹಾಯ ಧನವನ್ನು ಸಹಕಾರಿ ಸಂಸ್ಥೆಗಳು ಯಾವ ಯಾವ ಬಾಬ್ತಿನಲ್ಲಿ ವೆಚ್ಚ ಮಾಡಬಹುದು;<br>(ಸಹಕಾರಿ ಸಂಸ್ಥೆಗಳ ಹೆಸರಿನೊಂದಿಗೆ ಮಾಹಿತಿ ನೀಡುವುದು) | ಪಿಕಾರ್ಡ್ ಬ್ಯಾಂಕುಗಳು, ಡಿಸಿಸಿ ಬ್ಯಾಂಕುಗಳು ಮತ್ತು ಪ್ಯಾಕ್ಸ್‌ಗಳು ತಮ್ಮ ಸ್ವಂತ ಬಂಡವಾಳದಿಂದ, ಸರ್ಕಾರ, ನಬಾರ್ಡ್ ಮತ್ತು ಅಪೆಕ್ಸ್ ಬ್ಯಾಂಕಿನಿಂದ ಸಾಲ ಪಡೆದು ಅಲ್ಪಾವಧಿ, ಮಧ್ಯಮಾವಧಿ, ದೀರ್ಘಾವಧಿ ಕೃಷಿ ಸಾಲ ಮತ್ತು ಸ್ವ-ಸಹಾಯ ಗುಂಪುಗಳಿಗೆ ಸಾಲ ವಿತರಿಸಿ ನಿಗದಿತ ಅವಧಿಯಲ್ಲಿ ಸದಸ್ಯರು ಸಾಲ ಮರುಪಾವತಿಸಿದಲ್ಲಿ ಫಲಾನುಭವಿಗಳ ಪರವಾಗಿ ಸದರಿ ಸಂಸ್ಥೆಗಳಿಗೆ ಬಡ್ಡಿ ಸಹಾಯಧನವನ್ನು ನೀಡಲಾಗುತ್ತಿದ್ದು, ಈ ಬಡ್ಡಿ ಸಹಾಯಧನವನ್ನು ಸಹಕಾರ ಸಂಸ್ಥೆಗಳು ಸಾಲ ಪಡೆದ ಸಂಸ್ಥೆಗಳಿಗೆ ಬಡ್ಡಿ ಪಾವತಿಗೆ ಮತ್ತು ತಮ್ಮ ಆಡಳಿತ ವೆಚ್ಚ ಭರಿಸಲು ಬಳಕೆ ಮಾಡಿಕೊಳ್ಳುತ್ತಿವೆ.<br><br>ಸರ್ಕಾರ ಕಸ್ಕಾರ್ಡ್ ಬ್ಯಾಂಕಿಗೆ ನೀಡಿದ ಸಾಲವನ್ನು ನಬಾರ್ಡ್ ರೈತರಿಗೆ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಸಾಲ ನೀಡಲು ನಿಗದಿಪಡಿಸಿದ ಮಾನದಂಡಗಳನ್ವಯ ಪಿಕಾರ್ಡ್ ಬ್ಯಾಂಕಿನ ರೈತರ ಸದಸ್ಯರಿಗೆ ಸಾಲ ನೀಡಲು ಬಳಕೆ ಮಾಡಿಕೊಳ್ಳುತ್ತಾರೆ. |
| ಇ) | ಕಳೆದ 3 ವರ್ಷಗಳಲ್ಲಿ ಯಾವ ಯಾವ ಸಹಕಾರಿ ಸಂಸ್ಥೆಗಳಿಗೆ ಸಹಾಯ ಧನವನ್ನು ನೀಡಲಾಗಿದೆ; ಎಷ್ಟು ಮೊತ್ತದ ಸಹಾಯ ಧನವನ್ನು ನೀಡಲಾಗಿದೆ?<br>(ಸಹಕಾರಿ ಸಂಸ್ಥೆಯ ಹೆಸರಿನೊಂದಿಗೆ ಮಾಹಿತಿ ನೀಡುವುದು) | ಕಳೆದ 3 ವರ್ಷಗಳಲ್ಲಿ ಸಹಕಾರಿ ಸಂಸ್ಥೆಗಳು ರೈತ ಸದಸ್ಯರು ಮತ್ತು ಸ್ವ-ಸಹಾಯ ಗುಂಪುಗಳಿಗೆ ವಿತರಿಸಿದ ಸಾಲಗಳು ನಿಗದಿತ ಅವಧಿಯಲ್ಲಿ ಮರುಪಾವತಿಯಾಗಿ ಸದಸ್ಯರ ಪರವಾಗಿ ಸರ್ಕಾರದಿಂದ ನೀಡಿದ ಬಡ್ಡಿ ಸಹಾಯಧನದ ವರ್ಷವಾರು ವಿವರವನ್ನು ಈ ಕೆಳಗೆ ನೀಡಿದ್ದು, ಸಂಸ್ಥೆವಾರು ವಿವರವನ್ನು **ಅನುಬಂಧ-1 (ಅ)** ಮತ್ತು **(ಆ)** ರಲ್ಲಿ ನೀಡಲಾಗಿದೆ.<br><br>**(ರೂ.ಕೋಟಿಗಳಲ್ಲಿ)** |

| ಯೋಜನೆ ಹೆಸರು | 2018-19 | 2019-20 | 2020-21 |
|---|---|---|---|
| ಕೃಷಿ ಸಾಲಗಳ ಮೇಲಿನ ಬಡ್ಡಿ ಸಹಾಯಧನ | 777.50 | 1028.35 | 993.33 |
| ಸ್ವ-ಸಹಾಯ ಗುಂಪುಗಳ ಮೇಲಿನ ಬಡ್ಡಿ ಸಹಾಯಧನ | 59.90 | 65.11 | 86.50 |

**ಸಂಖ್ಯೆ: ಸಿಒ 355 ಸಿಎಲ್ಎಸ್ 2021**

(ಎಸ್.ಟಿ. ಸೋಮಶೇಖರ್)

**ಸಹಕಾರ ಸಚಿವರು**